## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | : | ~~1861~~ 1606 |
| ಸದಸ್ಯರ ಹೆಸರು | : | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 20.03.2020 |
| ಉತ್ತರಿಸುವವರು | : | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ತೆಗ್ಗಿ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ತೆಗ್ಗಿ ಗ್ರಾಮ ಸಾವಿರಾರು ಜನಸಂಖ್ಯೆಯುಳ್ಳ ಗ್ರಾಮವಾಗಿದ್ದು, ಹಾಗೂ ಸದರಿ ಗ್ರಾಮವು ಗ್ರಾಮ ಪಂಚಾಯಿತಿಯ ಕೇಂದ್ರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಬೀಳಗಿ ತಾಲೂಕಿನಲ್ಲಿ ತೆಗ್ಗಿ ಗ್ರಾಮವು ಗ್ರಾಮ ಪಂಚಾಯತ ಕೇಂದ್ರ ಸ್ಥಾನವಾಗಿದ್ದು, 2011ರ ಜನಗಣತಿಯ ಪ್ರಕಾರ 5118 ಜನಸಂಖ್ಯೆ ಹೊಂದಿದೆ. |
| (ಆ) | ಸದರಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕರಿಗೆ ಹಾಗೂ ಗ್ರಾಮಸ್ಥರಿಗೆ ಸಾಮೂಹಿಕ ಶೌಚಾಲಯ ಇಲ್ಲದಿರುವುದು ನಿಜವೇ; (ಸಂಪೂರ್ಣ ವಿವರ ನೀಡುವುದು) | • ಸದರಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿರುವ ಕುಟುಂಬಗಳಿಗೆ ವೈಯುಕ್ತಿಕ ಗೃಹ ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿದ್ದು, ಸ್ಥಳದ ಅಭಾವ ಹಾಗೂ ಸಾರ್ವಜನಿಕ ಸ್ಥಳಗಳಲ್ಲಿ ಅವಶ್ಯಕತೆಗೆ ಅನುಗುಣವಾಗಿ ಸಮುದಾಯ/ ಗುಂಪು ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿರುತ್ತದೆ.<br>• SBM & MGNEREGA ಸಮನ್ವಯಗೊಳಸಿಕೊಂಡು 18 ಕೊಠಡಿಯುಳ್ಳ 3 ಸಮುದಾಯ ಶೌಚಾಲಯ ನಿರ್ಮಾಣ ಮಾಡಿ, ನೀರಿನ ಸೌಲಭ್ಯ ಒದಗಿಸಲಾಗಿದೆ.<br>• ವೈಯಕ್ತಿಕ ಒಡೆತನದ 4 ಸ್ಥಳಗಳಲ್ಲಿ ಗುಂಪು ಶೌಚಾಲಯಗಳನ್ನು ನಿರ್ಮಿಸಲಾಗಿದೆ.<br>• SBM & MGNEREGA ಅಡಿ ಸಮನ್ವಯಗೊಳಸಿಕೊಂಡ 1 ಸಮುದಾಯ ಶೌಚಾಲಯ ಪ್ರಗತಿಯಲ್ಲಿರುತ್ತದೆ. ಈ ತಿಂಗಳ ಅಂತ್ಯಕ್ಕೆ ಪೂರ್ಣಗೊಳಸಲಾಗುವುದು. |
| (ಇ) | ಸದರಿ ಗ್ರಾಮ ಪಂಚಾಯಿತಿಯಲ್ಲಿ ಸಾರ್ವಜನಿಕರಿಗೆ ಹಾಗೂ ಗ್ರಾಮಸ್ಥರಿಗೆ ಅನುಕೂಲವಾಗುವ ರೀತಿಯಲ್ಲಿ ಶೌಚಾಲಯ ನಿರ್ಮಿಸುವಂತೆ ಹಲವು ಬಾರಿ ಮನವಿ ಮಾಡಿಕೊಂಡಿರುವುದು ನಿಜವೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಸಾರ್ವಜನಿಕ ಉಪಯೋಗಕ್ಕಾಗಿ ಸಾಮೂಹಿಕ ಶೌಚಾಲಯ ನಿರ್ಮಿಸಲಾಗುವುದು; (ಸಂಪೂರ್ಣ ವಿವರ ನೀಡುವುದು) | ತೆಗ್ಗಿ ಗ್ರಾಮದಲ್ಲಿ ಈಗಾಗಲೇ 3 ಸಮುದಾಯ ಶೌಚಾಲಯ, 2 ಸಾಮೂಹಿಕ ಶೌಚಾಲಯ ಮತ್ತು 4 ಸ್ಥಳಗಳಲ್ಲಿ ವೈಯಕ್ತಿಕ ಒಡೆತನದ ಗುಂಪು ಶೌಚಾಲಯ ನಿರ್ಮಾಣ ಮಾಡಿ ನೀರಿನ ಸೌಲಭ್ಯ ಒದಗಿಸಿ, ಸಾರ್ವಜನಿಕರ ಉಪಯೋಗಕ್ಕೆ ಒದಗಿಸಲಾಗಿದೆ ಹಾಗೂ 1 ಸಮುದಾಯ ಶೌಚಾಲಯ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| (ಈ) | ಸದರಿ ಗ್ರಾಮ ಪಂಚಾಯಿತಿಯಲ್ಲಿ ಸರ್ಕಾರಿ ಹಾಗೂ ಖಾಸಗಿ ಬಸ್ ನಿಲ್ದಾಣ ಮತ್ತು ಸೇಡಜಿ ಪ್ಲಾಟ್ (ಲಡ್ಡು ಮುತ್ಯಾನ ಗುಡಿ ಹತ್ತಿರ) ಬಡಾವಣೆಯಲ್ಲಿ ಶೌಚಾಲಯ ನಿರ್ಮಿಸಲು ಕ್ರಮ ಕೈಗೊಳ್ಳಲಾಗುವುದೇ? (ವಿವರ ನೀಡುವುದು) | ಸರ್ಕಾರಿ, ಖಾಸಗಿ ಬಸ್ ನಿಲ್ದಾಣ ಸೇಡಜಿ ಪ್ಲಾಟ್‌ಗಳಲ್ಲಿ ಸಮುದಾಯ ಶೌಚಾಲಯ ನಿರ್ಮಾಣ ಮಾಡಲು ಸರ್ಕಾರಿ ಗ್ರಾಮ ಠಾಣ ಸ್ಥಳಾವಕಾಶ ಲಭ್ಯವಿಲ್ಲದ ಕಾರಣ ನಿರ್ಮಿಸಲು ಸಾಧ್ಯವಾಗಿರುವುದಿಲ್ಲ ಹಾಗೂ ಈ ಬಡಾವಣೆಯಲ್ಲಿ ವೈಯಕ್ತಿಕ ಗೃಹ ಶೌಚಾಲಯದ ಸೌಲಭ್ಯ ಒದಗಿಸಲಾಗಿದೆ. |

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು